KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಜುಲೈ ೮, ೨೦೧೦ (ಆಷಾಢ ೧೭, ಶಕ ವರ್ಷ ೧೯೩೨) | ಸಂಚಿಕೆ ೨೭ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** 2009–10ನೇ ಸಾಲಿನಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಕಾರ್ಯಕ್ರಮಗಳಿಗೆ ಮಾಡಲಾದ ವೆಚ್ಚ ರೂ.700.00 ಲಕ್ಷಗಳ ಲೆಕ್ಕ ತಪಾಸಣೆ ಕುರಿತು.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ : ವಿಯಇ 33 ವಿತ್ರಮ 2009, ದಿನಾಂಕ 13–07–2009.

2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಇವರ ಟಿಪ್ಪಣಿ ಸಂಖ್ಯೆ **prs** : 49 : 2010, ದಿನಾಂಕ 22–02–2010.

3) ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಕಾರ್ಯನಿರ್ವಾಹಕ ಕಾರ್ಯದರ್ಶಿಯವರ ಟಿಪ್ಪಣಿ ದಿನಾಂಕ : 09–04–2010.

**ಪ್ರಸ್ತಾವನೆ :**

ಮೇಲೆ ಓದಲಾದ (1) ರಲ್ಲಿ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಕಾರ್ಯಕ್ರಮಗಳಿಗಾಗಿ 2009–10 ನೇ ಸಾಲಿನ ಲೆಕ್ಕಶೀರ್ಷಿಕೆ 3425–60–600–0–02, ಯೋಜನೆ ಅಡಿಯಲ್ಲಿ ಕಲ್ಪಿಸಲಾದ ಒಟ್ಟು ಆಯವ್ಯಯ ಅನುದಾನ ರೂ.10.00 ಕೋಟಿಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಮೇಲೆ (2) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ವಿವಿಧ ಸಂಸ್ಥೆಗಳಿಗೆ ರೂ.700.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದ್ದು ಇದರ ಸಮರ್ಪಕ ಬಳಕೆಯನ್ನು ಖಚಿತಪಡಿಸಿಕೊಳ್ಳುವುದು ಅವಶ್ಯಕವಾಗಿರುವುದರಿಂದ ಈ ಪ್ರಕರಣವನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ, ದಾರ್ಶನಿಕ ಸಮೂಹದ ಕಾರ್ಯಕ್ರಮಗಳಿಗೆ ಬಿಡುಗಡೆ ಮಾಡಲಾದ ರೂ.700.00 ಲಕ್ಷಗಳ ವೆಚ್ಚಕ್ಕೆ ಸಂಬಂಧಿಸಿದಂತೆ C & AG empanelled Auditors ರವರಿಂದ ಲೆಕ್ಕ ತಪಾಸಣೆ ನಡೆಸಲು ತಿಳಿಸಿರುತ್ತಾರೆ.

ಮೇಲೆ ಓದಲಾದ (3) ರಲ್ಲಿನ ಪತ್ರಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಕಾರ್ಯನಿರ್ವಾಹಕ ಕಾರ್ಯದರ್ಶಿಯವರು, C & AG empanelled Auditors ಆದ M/s MNS & Co. Bangalore ರವರನ್ನು ಸಂಪರ್ಕಿಸಲಾಗಿದೆ. ಇವರು ದಾರ್ಶನಿಕ ಸಮೂಹದ ಕಾರ್ಯಕ್ರಮಗಳಿಗೆ ಮಾಡಲಾದ ವೆಚ್ಚ ರೂ.700.00 ಲಕ್ಷಗಳ ಕುರಿತು ತಪಾಸಣೆ ಮಾಡಲು ಒಪ್ಪಿಗೆ ನೀಡಿರುತ್ತಾರೆ ಮತ್ತು ಈ ತಪಾಸಣಾ ಕಾರ್ಯನಿರ್ವಹಿಸಲು The Council of the Institute of Chartered Accountants of India, ರವರು 12 ಮೇ, 2006 ರಿಂದ ಪರಿಷ್ಕರಿಸಿ ನಿಗದಿಪಡಿಸಿದ ತಪಾಸಣಾ ಶುಲ್ಕವನ್ನು (Audit Charges) ಆಧರಿಸಿ ರೂ.60,000/– + ಸೇವಾ ತೆರಿಗೆ 10.3% ಗಳನ್ನು ಈ ತಪಾಸಣಾ ಕಾರ್ಯಕ್ಕೆ ನೀಡಬೇಕೆಂದು ತಿಳಿಸಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ : ವಿಯಇ 39 ವಿತ್ರಮ 2010, ಬೆಂಗಳೂರು, ದಿನಾಂಕ : 17–04–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಬಿಡುಗಡೆ ಮಾಡಲಾದ ರೂ.700.00 ಲಕ್ಷಗಳ ವೆಚ್ಚಕ್ಕೆ ಸಂಬಂಧಿಸಿದಂತೆ C & AG empanelled Auditors ಆದ M/s MNS & Co. Bangalore ರವರಿಂದ ಲೆಕ್ಕ ತಪಾಸಣೆ ನಡೆಸಲು ತೀರ್ಮಾನಿಸಲಾಗಿದ್ದು The Council of the Institute of Chartered Accountants of India, ರವರು 12 ಮೇ, 2006 ರಿಂದ ಪರಿಷ್ಕರಿಸಿ ನಿಗದಿಪಡಿಸಿದ ತಪಾಸಣಾ ಶುಲ್ಕವನ್ನು (Audit Charges) ಆಧರಿಸಿ ರೂ.60,000/– + ಸೇವಾ ತೆರಿಗೆ 10.3% ಗಳನ್ನು ಈ ತಪಾಸಣಾ ಕಾರ್ಯಕ್ಕೆ ಸಂಭಾವನೆಯಾಗಿ ನೀಡಲು ಮಂಜೂರಾತಿ ನೀಡಲಾಗಿದೆ. ಈ ಲೆಕ್ಕತಪಾಸಣೆಗೆ ಸಂಬಂಧಿಸಿದಂತೆ ಕೈಗೊಳ್ಳಲಾಗುವ ಪ್ರಯಾಣ ಮುಂತಾದ ವೆಚ್ಚಗಳನ್ನು ವಾಸ್ತವಿಕತೆಯನ್ನಾಧರಿಸಿ ಹಿಂಬರಿಸಲು ಸಹಾ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ.

1. ಈ ತಪಾಸಣಾ ಕಾರ್ಯವು 2009–10ನೇ ಸಾಲಿನಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಬಿಡುಗಡೆ ಮಾಡಿದ ಅನುದಾನಕ್ಕೆ ಸಂಬಂಧಪಟ್ಟ ಮಂಜೂರಾತಿ ಆದೇಶಗಳನ್ನು ಒಳಗೊಂಡಂತೆ ವಿವಿಧ ಸಂಸ್ಥೆಗಳಿಗೆ ಬಿಡುಗಡೆ ಮಾಡಲಾದ ಅನುದಾನದ ವೆಚ್ಚಕ್ಕೆ ಸಂಬಂಧಿಸಿದ ಓಚರ್, ಬ್ಯಾಂಕ್ ತಃಖ್ತೆಗಳ ಪರಿಶೀಲನೆ, ಮುಂತಾದವುಗಳನ್ನು ನಿಗದಿತ ಅವಧಿಯಲ್ಲಿ (31, ಜುಲೈ 2010 ರ ಒಳಗಾಗಿ) ನಿರ್ವಹಿಸಿ, ಸಂಪೂರ್ಣ ರೂ.700.00 ಲಕ್ಷಗಳ ಮೊತ್ತದ ವೆಚ್ಚಕ್ಕೆ ಸಂಬಂಧಿಸಿದಂತೆ ಸಮಗ್ರ ತಪಾಸಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಬೋರಲಿಂಗಯ್ಯ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 1074

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** ಬೆಂಗಳೂರು ಇಂಡಿಯಾ ಬಯೋ 2010ರ ಕಾರ್ಯಕ್ರಮಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ : ವಿಯಇ 50 ವಿತ್ರಮ 2010, ದಿನಾಂಕ 12–04–2010.
2) ನಿರ್ದೇಶಕರು (ತಾಂತ್ರಿಕ), ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಬೆಂಗಳೂರು ಇವರ ಏಕ ಕಡತ ಸಂಖ್ಯೆ : ವಿತಂಇ/ಬಯೋ–10/1/2010, ದಿನಾಂಕ 07–04–2010.

**ಪ್ರಸ್ತಾವನೆ :**

ಮೇಲೆ ಓದಲಾದ (1) ರಲ್ಲಿನ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು ಮುಂದುವರಿಸಿ, 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3425–60–200–0–01 (101) (ಯೋ) ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯಾನುದಾನವಾಗಿ ಒಟ್ಟು ರೂ. 340.00 ಲಕ್ಷಗಳ ಅನುದಾನವನ್ನು ಕಲ್ಪಿಸಲಾಗಿದೆ.

ಮೆ: ಎಂ.ಎಂ. ಆಕ್ಟಿವ್, ನಂ.9, ಯುಎಸ್‌ಐ ಬಿಲ್ಡಿಂಗ್, ಮೊದಲನೇ ಮಹಡಿ, ವಸಂತನಗರ, ಬೆಂಗಳೂರು ಇಂಡಿಯಾ ಬಯೋ 2010ರ ಕಾರ್ಯಕ್ರಮವನ್ನು 2010ರ ಜೂನ್ 2 ರಿಂದ 4 ರವರೆಗೆ ದಿ ಲಲಿತ್ ಅಶೋಕ ಹೋಟೆಲ್, ಬೆಂಗಳೂರು ಇಲ್ಲಿ ನಡೆಸಲು ರೂ.10.00 ಲಕ್ಷಗಳ ಸಹಾಯಾನುದಾನ ಕೋರಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಸದರಿ ಕಾರ್ಯಕ್ರಮ ಹಮ್ಮಿಕೊಳ್ಳಲು ರೂ.10.00 ಲಕ್ಷಗಳನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ (2)ರಲ್ಲಿನ ಏಕ ಕಡತದಲ್ಲಿ ನಿರ್ದೇಶಕರು (ತಾಂತ್ರಿಕ), ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಬೆಂಗಳೂರು ಇವರು ಶಿಫಾರಸ್ಸು ಮಾಡಿರುವುದನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಿಯಇ 60 ವಿತ್ರಮ 2010, ಬೆಂಗಳೂರು, ದಿನಾಂಕ : 17–04–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಪ್ರಾಯೋಜಕರು, ಮೆ. ಎಂ.ಎಂ. ಆಕ್ಟಿವ್, ನಂ. 9, ಯು.ಎಸ್.ಐ. ಬಿಲ್ಡಿಂಗ್, ಮೊದಲನೇ ಮಹಡಿ, ವಸಂತನಗರ, ಬೆಂಗಳೂರು. ಇವರು ಬೆಂಗಳೂರು ಬಯೋ 2010ರ ಕಾರ್ಯಕ್ರಮವನ್ನು 2010ರ ಜೂನ್ 2 ರಿಂದ 4ರ ವರೆಗೆ ಬೆಂಗಳೂರಿನಲ್ಲಿ ನಡೆಸಲು ರೂ. 10.00 ಲಕ್ಷಗಳ (ರೂಪಾಯಿ ಹತ್ತು ಲಕ್ಷಗಳು ಮಾತ್ರ)

ಸಹಾಯಾನುದಾನವನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು, ಬೆಂಗಳೂರು. ಇವರಿಗೆ ಈ ಕೆಳಕಂಡ ನಿಬಂಧನೆ ಮತ್ತು ಷರತ್ತುಗಳಿಗೊಳಪಟ್ಟು ಮಂಜೂರು ಮಾಡಿದೆ.

1) ಈ ವೆಚ್ಚವನ್ನು 2010–11 ನೇ ಸಾಲಿನ ಆಯವ್ಯಯದಲ್ಲಿನ ಲೆಕ್ಕಶೀರ್ಷಿಕೆ **3425–60–200–0–01 (101) (ಯೋ)** ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯಾನುದಾನ ಇದರ ಅಡಿಯಲ್ಲಿ ಭರಿಸತಕ್ಕದ್ದು.
2) ಈ ಮೊತ್ತವನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು, **ಬೆಂಗಳೂರು,** ಇವರು ಖಜಾನೆಯಿಂದ ಪಡೆದು ಮೇಲ್ಕಾಣಿಸಿದ ಕಾರ್ಯಕ್ರಮಕ್ಕಾಗಿ ಮೆ. ಎಂ.ಎಂ. ಆಕ್ಟೀವಾ ಈ ಸಂಸ್ಥೆಗೆ ಪಾವತಿಸತಕ್ಕದ್ದು.
3) ಈ ಮೇಲಿನ ಅನುದಾನವನ್ನು ಖರ್ಚು ಮಾಡಿದ ಬಗ್ಗೆ ಸಂಸ್ಥೆಯು ಉಪಯೋಗತಾ ಪ್ರಮಾಣ ಪತ್ರ ಹಾಗೂ ಆಡಿಟ್ ಆದ ಲೆಕ್ಕಪತ್ರಗಳನ್ನು ಕಾರ್ಯಕ್ರಮ ಮುಗಿದ ತಕ್ಷಣ ಸಲ್ಲಿಸತಕ್ಕದ್ದು.
4) ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಕಾರ್ಯಕ್ರಮಕ್ಕೆ ಮಾತ್ರ ಉಪಯೋಗಿಸತಕ್ಕದ್ದು, ಹಾಗೂ ಈ ಹಣವನ್ನು ಬೇರೆ ಯೋಜನೆಗೆ/ಕಾರ್ಯಕ್ರಮಗಳಿಗೆ ಸರ್ಕಾರದ ಅನುಮತಿ ಇಲ್ಲದೆ ವರ್ಗಾಯಿಸಬಾರದು.
5) ಉದ್ದೇಶಿತ ಕಾರ್ಯಕ್ರಮಕ್ಕೆ ಖರ್ಚಾಗದ ಬಾಬ್ತು ಅನುದಾನವನ್ನು ಉಳಿಸಿಕೊಂಡು ಅದನ್ನು ಸರ್ಕಾರದ ಗಮನಕ್ಕೆ ತರದೇ ಇದ್ದದ್ದು ಕಂಡುಬಂದಲ್ಲಿ ಸದರಿ ಮೊತ್ತಕ್ಕೆ ಬ್ಯಾಂಕ್ ನೀಡುವ ಸರಳ ಬಡ್ಡಿಯೊಂದಿಗೆ ಸರ್ಕಾರಕ್ಕೆ ಪಾವತಿಸಿಕೊಳ್ಳಲು ಕ್ರಮಕೈಗೊಳ್ಳಲಾಗುವುದು.
6) ಅನುದಾನವನ್ನು ಬಳಸದೇ ಬ್ಯಾಂಕಿನಲ್ಲಿ ಠೇವಣಿ ಮಾಡಿದ ಪಕ್ಷದಲ್ಲಿ ಅದನ್ನು ಸರ್ಕಾರದ ಗಮನಕ್ಕೆ ತರತಕ್ಕದ್ದು ಮತ್ತು ಅಂತಹ ಠೇವಣಿ ಮೊತ್ತಕ್ಕೆ ದೊರೆಯುವ ಬಡ್ಡಿಯನ್ನು ಹಿಂತೆಗೆದುಕೊಳ್ಳಲು ಕ್ರಮ ತೆಗೆದುಕೊಳ್ಳಲಾಗುವುದು.
7) ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನದ ಲೆಕ್ಕಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದ್ದಲ್ಲಿ ತಪ್ಪದೇ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ 16/05/2008ರ ಅಡಿಯಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಬೋರಲಿಂಗಯ್ಯ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 1075

## INFRASTRUCTURE DEVELOPMENT SECRETARIAT

**Sub :** Appointment of Nodel Agency for construction of Airstrips/Airports in Karnataka.

**Read :** 1. Government letter No. IDD 125 DIA 2008, dated 24-03-2009.
2. Government letter No. IDD 37 DIA 2003 (i), dated 3-04-2010.
3. Government letter No. IDD 37 DIA 2003 (ii), dated 3-04-2010.

**Preamble:**

In letter read at Sl. No. (1) above, establishment of 10 airstrips was entrusted to KHB. KHB had made preparatory works in respect of a few airstrips and master plans for Raichur, Chikmagalur, Gadag, Bagalkot, Udupi and Davangere respectively. Since there was delay in identifying the land and organizing the inspection by AAI, it was decided to withdraw the development of airstrips at Chitradurga, Karwar, Haveri, Kollegal, Yadgir and Koppal districts from KHB and to entrust the same now to iDeCK along with the development of airstrips at Hassan and Bellary and the same was communicated, vide, letter dated 03-04-2010 read at Sl.No. (2) above.

2. Further, KHB was directed to function as a Nodel Agency for the development of airstrips at Raichur, CHikmagalur, Gadag, Bagalkot, Udupi and Davanagere vide letter dated 03-04-2010 read at Sl.No. (3) above.

3. To entrust the responsibility of Nodal Agency to IDeCK and KHB as revised above the following order is issued.

**GOVERNMENT ORDER NO. IDD 24 DIA 2010, BANGALORE, DATED 21-04-2010**

In the circumstances explained in the preamble, iDeCK is appointed as a nodel agency for the development of Greenfield airports at Bellary and Hassan along with the construction of airstrips at Chitradurga, Karwar, Haveri, Kollegal, Yadgir and Koppal. iDeCK will also continue to be the Nodal Agency for the development of Gulbarga, and Bijapur Airports.

2. Karnataka Housing Board (KHB) is appointed as Nodal Agency for the construction of Airstrips at Raichur, Gadag, Chickmaglur, Bagalkot, Udupi and Davanagere.

3. The expert who has been so far engaged by KHB for airport projects will continue as an independent adviser in all technical matters in the development of airstrips, in respect of airstrips for which KHB is the Nodal Agency.

4. KHB and iDeCK would do the following :-

i. The agency shall first determine the type of airstrip required
ii. Liaise with Dy. Commissioner's in identification of lands.
iii. Liaise with Statutory Authorities, AAI etc. to examine the suitability of the selected site and getting clearances.
iv. Prepare Master Plan and other development plan.
v. Co-ordinate all the processes for acquisition of land.
vi. Prepare procurement documents, assist in tender
vii. Assist in evaluation of responses to procurement – tender, signing of Project Development Agreement, Land Lease Agreement or entrusting projects on EPC (as and when decided)
viii. (a) Prepare activity schedule in MS project and review the progress in terms of physical and financial performances.
(b) Submit MPIC for the full year and
ix. Assist IDD in preparing for meetings in Ministry of Civil Aviation.
x. All aspects relating to commissioning.

By Order and in the name of the Governor of Karnataka,

PR. 1076

**(N. Manjula Geetha)**
Under Secretary to Government,
Infrastructure Development Department.

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಆರ್. ರಂಗಸ್ವಾಮಯ್ಯ, ತಹಶೀಲ್ದಾರ್, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ ಇವರ ಅಮಾನತ್ತನ್ನು ತೆರವುಗೊಳಿಸಿ ಸ್ಥಳ ನಿಯುಕ್ತಿಗೊಳಿಸುವ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ : ಕಂಇ 556 ಎಎಸ್‌ಡಿ 2009, ದಿನಾಂಕ 21–12–2009
2) ದಿನಾಂಕ 8–4–2010 ರಂದು ನಡೆದ ವೃಂದ ನಿರ್ವಹಣಾ ಪ್ರಾಧಿಕಾರ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ : (1) ರ ಸರ್ಕಾರದ ಆದೇಶದಲ್ಲಿ, ಚಿಕ್ಕಮಗಳೂರು ತಾಲ್ಲೂಕು ಹಿರೇಗೌಡ ಗ್ರಾಮದ ಸರ್ವೆ ನಂ. 148/3ಎ1ರ 3–00 ಎಕರೆ ಶ್ರೀ ಸದಾಶಿವ ಬಿನ್ ಪುಟ್ಟಪ್ಪ ಎಂಬುವರ ಖಾತೆಯ ಖುಷ್ಕಿ ಹಿಡುವಳಿ ಜಮೀನಿನ ಪೈಕಿ 0.18 ಗುಂಟೆ ಜಮೀನನ್ನು ಬಾಜುದಾರರಾದ ಶ್ರೀ ಹೆಚ್. ಎಸ್. ಶೇಖರಪ್ಪ ಎಂಬುವರು ಒತ್ತುವರಿ ಮಾಡಿರುವುದನ್ನು ಬಿಡಿಸಿ ಕೊಡಬೇಕೆಂದು ಠಾಣಾಧಿಕಾರಿ, ಸಖರಾಯ ಪಟ್ಟಣ ಪೋಲೀಸ್ ಠಾಣೆ ಇವರಿಗೆ ಶ್ರೀ ಹೆಚ್.ಪಿ.ಸದಾಶಿವ ಎಂಬುವರ ಖಾತೆಯ ಖಾಸಗಿ ಜಮೀನಿನ ಒತ್ತುವರಿಯನ್ನು ತೆರವು ಮಾಡಿಸಿ ಖಾತೆದಾರರಿಗೆ ಬಿಡಿಸಿಕೊಡುವಂತೆ ಪೊಲೀಸ್ ಅಧಿಕಾರಿಗೆ ಆದೇಶ ಮಾಡಿ ಕರ್ತವ್ಯಲೋಪ ಎಸಗಿ ಕರ್ನಾಟಕ ನಾಗರೀಕ ಸೇವಾ (ನಡವಳಿ) ನಿಯಮಗಳು 1966ರ ನಿಯಮ 3(2)(ii) ನ್ನು ಸ್ಪಷ್ಟವಾಗಿ ಉಲ್ಲಂಘಿಸಿರುವುದರಿಂದ, ಮೇಲೆ ಓದಲಾದ ಕ್ರಮಸಂಖ್ಯೆ : (1)ರ ಸರ್ಕಾರದ ಆದೇಶದಲ್ಲಿ, ಶ್ರೀ ಆರ್. ರಂಗಸ್ವಾಮಯ್ಯ, ತಹಶೀಲ್ದಾರ್, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ)

ನಿಯಮಾವಳಿಗಳು 1957ರ ನಿಯಮ 10(1)(ಡಿ) ಮತ್ತು 10(3) ರನ್ವಯ ಇಲಾಖಾ ವಿಚಾರಣೆ ಬಾಕಿ ಇರಿಸಿ, ಅಮಾನತ್ತಿನಲ್ಲಿ ಇರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (2) ರ ದಿನಾಂಕ : 8–4–2010ರ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯ ನಡವಳಿಯಲ್ಲಿನ ಕ್ರಮ ಸಂಖ್ಯೆ : 11 ರಲ್ಲಿ ಶ್ರೀ ಆರ್. ರಂಗಸ್ವಾಮಯ್ಯ, ತಹಶೀಲ್ದಾರ್, ಇವರ ಅಮಾನತ್ತನ್ನು ತೆರವುಗೊಳಿಸಿ ವಿಶೇಷ ತಹಶೀಲ್ದಾರ್, ಹನೂರು, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ ಇಲ್ಲಿಗೆ ನೇಮಿಸುವಂತೆ ನಿರ್ಣಯವಾಗಿರುತ್ತದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 556 ಎಎಸ್‌ಡಿ 2009, ಬೆಂಗಳೂರು, ದಿನಾಂಕ : 20–04–2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಆರ್. ರಂಗಸ್ವಾಮಯ್ಯ, ತಹಶೀಲ್ದಾರ್, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ (ಪ್ರಸ್ತುತ ಅಮಾನತು) ಇವರನ್ನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 10(5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸದರಿಯವರನ್ನು ಈ ಕೂಡಲೇ ಜಾರಿಗೆ ಬರುವಂತೆ, ಅಮಾನತ್ತಿನಿಂದ ತೆರವುಗೊಳಿಸಿ, ಇವರನ್ನು ವಿಶೇಷ ತಹಶೀಲ್ದಾರ್, ಹನೂರು, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ ಇಲ್ಲಿ ಖಾಲಿ ಇರುವ ಹುದ್ದೆಗೆ ಈ ಕೂಡಲೇ ಜಾರಿಗೆ ಬರುವಂತೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1077

**(ಎಸ್.ಬಿ. ಸಸಾಲಟ್ಟಿ),**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಶ್ರೀ ಬಿ. ವೆಂಕಟಯ್ಯ, ಅರ್ಧವೀಡು ಮಂಡಲ, ಪಾಪನೇಣಿ ಪಲ್ಯ, ಪ್ರಕಾಶಂ ಜಿಲ್ಲೆ ಇವರಿಗೆ ಒಣ ಬೊಂಬುಗಳನ್ನು ಒದಗಿಸುವ ಬಗ್ಗೆ.

**ಓದಲಾಗಿದೆ :** 1) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಪತ್ರ ಸಂಖ್ಯೆ : ಬಿ4/ ಬೊಂಬು/ವೆಕಟ/ಸಿಆರ್–27/09–10, ದಿನಾಂಕ 03–02–2010.

**ಪ್ರಸ್ತಾವನೆ :**

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 03–02–2010 ರ ಪತ್ರದಲ್ಲಿ ಶ್ರೀ ಬಿ. ವೆಂಕಟಯ್ಯ, ಅರ್ಧವೀಡು ಮಂಡಲ, ಪಾಪನೇಣಿ ಪಲ್ಯ, ಪ್ರಕಾಶಂ ಜಿಲ್ಲೆ 10,000 ಮೆಟ್ರಿಕ್ ಟನ್ ಒಣ ಬೊಂಬುಗಳನ್ನು ಒದಗಿಸುವಂತೆ ಕೋರಿರುವುದಾಗಿ ತಿಳಿಸಿರುತ್ತಾರೆ. ಹಳಿಯಾಳ, ಕಾರವಾರ ಮತ್ತು ಯಲ್ಲಾಪುರ ವಿಭಾಗಗಳಲ್ಲಿ 2,57,449 ಘ.ಮೀ. ಹೂ ಬಿಟ್ಟ ಒಣಗಿ ಮುರಿದು ಬಿದ್ದ ಬೊಂಬುಗಳು ಲಭ್ಯವಿರುವುದರಿಂದ ಮತ್ತು ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಅಲ್ಲದೆ, ಅರಣ್ಯಕ್ಕೆ ಬೆಂಕಿ ಬೀಳುವುದನ್ನು ತಡೆಗಟ್ಟುವ ದೃಷ್ಟಿಯಿಂದ ಶ್ರೀ ಬಿ. ವೆಂಕಟಯ್ಯ, ಅರ್ಧವೀಡು ಮಂಡಲ, ಪಾಪನೇಣಿ ಪಲ್ಯ, ಪ್ರಕಾಶಂ ಜಿಲ್ಲೆ ಇವರಿಗೆ 10,000 ಮೆಟ್ರಿಕ್ ಟನ್ ಒಣ ಬೊಂಬುಗಳನ್ನು ಪ್ರತಿ ಮೆಟ್ರಿಕ್ ಟನ್‌ಗೆ ರೂ. 650.00+ತೆರಿಗೆಗಳು ಹಾಗೂ ಶೇ.10% ಮೇಲ್ವಿಚಾರಣಾ ಶುಲ್ಕವನ್ನು ಮುಂಗಡವಾಗಿ ಪಾವತಿಸಿಕೊಂಡು ನೀಡಲು ಕೋರಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : 24 ಎಫ್‌ಡಿಪಿ 2010, ಬೆಂಗಳೂರು, ದಿನಾಂಕ : 19–04–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಕೆನರಾ ವೃತ್ತದ ಹಳಿಯಾಳ, ಕಾರವಾರ ಮತ್ತು ಯಲ್ಲಾಪುರ ವಿಭಾಗಗಳಲ್ಲಿ ಲಭ್ಯವಿರುವ ಹೂ ಬಿಟ್ಟ, ಒಣಗಿರುವ ಮತ್ತು ಒಣಗುತ್ತಿರುವ ಹಾಗೂ ಮುರಿದು ಬಿದ್ದ ಬೊಂಬುಗಳ ಪೈಕಿ 10,000 ಮೆಟ್ರಿಕ್ ಟನ್ ಒಣ ಬೊಂಬುಗಳನ್ನು ಶ್ರೀ ಬಿ. ವೆಂಕಟಯ್ಯ, ಅರ್ಧವೀಡು ಮಂಡಲ, ಪಾಪನೇಣಿ ಪಲ್ಯ, ಪ್ರಕಾಶಂ ಜಿಲ್ಲೆ ಇವರಿಗೆ ಮೆಟ್ರಿಕ್ ಟನ್‌ಗೆ ರೂ. 650.00+ತೆರಿಗೆಗಳು ಹಾಗೂ ಶೇ.10% ಮೇಲ್ವಿಚಾರಣಾ ಶುಲ್ಕವನ್ನು ಮುಂಗಡವಾಗಿ ಪಾವತಿಸಿಕೊಂಡು ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕೆಗಳ ನಿಗಮದ ಮುಖಾಂತರ ಸರಬರಾಜು ಮಾಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1078

**(ಗೋಪಾಲ್),**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಬೆಳಗಾಂ ಮತ್ತು ಕೆನರಾ ವೃತ್ತಗಳಲ್ಲಿ ಹೂ ಬಿಟ್ಟ ಮತ್ತು ಒಣಗಿದ ಬೊಂಬುಗಳನ್ನು ಮೆ:ಜೆ.ಕೆ. ಪೇಪರ್ ಲಿ. ಇವರಿಗೆ ಒದಗಿಸುವ ಬಗ್ಗೆ.

**ಓದಲಾಗಿದೆ :**
1) ಜನರಲ್ ಮ್ಯಾನೇಜರ್, ಜೆ.ಕೆ. ಪೇಪರ್ ಲಿ., ಗುಜರಾತ್ ಇವರ ಪತ್ರ ಸಂಖ್ಯೆ : RMT/BAM PUR/2009–10. ದಿನಾಂಕ : 05–10–2009 ಮತ್ತು 28–03–2010.
2) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಪತ್ರ ಸಂಖ್ಯೆ : ಎ7/ಬಿಎಂಬಿ/ಟಿಎನ್‌ಡಿ/ಸಿಆರ್–1/09–10, ದಿನಾಂಕ 29/30–01–2010.

**ಪ್ರಸ್ತಾವನೆ :**

ಜನರಲ್ ಮ್ಯಾನೇಜರ್, ಜೆ.ಕೆ. ಪೇಪರ್ ಲಿ., ಗುಜರಾತ್ ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 28–03–2010 ರ ಪತ್ರದಲ್ಲಿ ಸದರಿಯವರ ಸಂಸ್ಥೆಗೆ ಏಪ್ರಿಲ್ 2010 ರಿಂದ ಜೂನ್ 2010 ರವರೆಗೆ 2,000 ಮೆಟ್ರಿಕ್ ಟನ್ ಮತ್ತು ಅಕ್ಟೋಬರ್ 2010 ರಿಂದ ಜೂನ್ 2011 ರವರೆಗೆ 40,000 ಪ್ರತಿ ಮೆಟ್ರಿಕ್ ಟನ್ ಬಿದಿರನ್ನು ರೂ. 450–00 ರ ದರದಲ್ಲಿ ಒದಗಿಸುವಂತೆ ಕೋರಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 29/30–01–2010 ರ ಪತ್ರದಲ್ಲಿ ಕೆನರಾ ವೃತ್ತದಲ್ಲಿ 19,800 ಮತ್ತು ಬೆಳಗಾಂ ವೃತ್ತದಲ್ಲಿ 2,88,605 ಮೆಟ್ರಿಕ್ ಟನ್ ಒಣಗಿದ ಬೊಂಬುಗಳು ಬಹುತೇಕ ಮುರಿದು ಬಿದ್ದು ಅವುಗಳನ್ನು ದಾಸ್ತಾನು ಮಾಡುವುದು ಕಷ್ಟಕರವಾಗಿರುವುದರಿಂದ ಮತ್ತು ಸರ್ಕಾರದ ಆದಾಯದ ಹಿತದೃಷ್ಟಿ ಹಾಗೂ ಅರಣ್ಯಕ್ಕೆ ಬೆಂಕಿ ಬೀಳುವುದನ್ನು ತಡೆಗಟ್ಟುವ ದೃಷ್ಟಿಯಿಂದ ಮೆ. ಜೆ.ಕೆ. ಪೇಪರ್ ಲಿ. ಇವರಿಗೆ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : 120 ಎಫ್‌ಡಿಪಿ 2009, ಬೆಂಗಳೂರು, ದಿನಾಂಕ : 19–04–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಬೆಳಗಾಂ ಮತ್ತು ಕೆನರಾ ವೃತ್ತಗಳಲ್ಲಿ ಲಭ್ಯವಿರುವ ಹೂ ಬಿಟ್ಟು ಒಣಗಿದ ಮತ್ತು ಒಣಗುತ್ತಿರುವ ಹಾಗೂ ಮುರಿದು ಬಿದ್ದಿರುವ ಬೊಂಬುಗಳ ಪೈಕಿ ಏಪ್ರಿಲ್ 2010 ರಿಂದ ಜೂನ್ 2010 ರವರೆಗೆ 2,000 ಮೆಟ್ರಿಕ್ ಟನ್ ಮತ್ತು ಅಕ್ಟೋಬರ್ 2010 ರಿಂದ ಜೂನ್ 2011 ರವರೆಗೆ 40,000 ಮೆಟ್ರಿಕ್ ಟನ್ ಬೊಂಬುಗಳನ್ನು ಮೆ. ಜೆ.ಕೆ. ಪೇಪರ್ ಮಿಲ್ಸ್ ಇವರಿಗೆ ರೂ. 450–00 + ತೆರಿಗೆಗಳು ದರದಲ್ಲಿ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮದ ಮುಖಾಂತರ ಸರಬರಾಜು ಮಾಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1079

**(ಗೋಪಾಲ್),**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ :** ಚಿತ್ರದುರ್ಗ ಜಿಲ್ಲೆಯ ದಲಿತರ ಮೇಲಿನ ದೌರ್ಜನ್ಯದ ಬಗ್ಗೆ ಸಿ.ಐ.ಡಿ. ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ :** ಬಹುಜನ ಸಮಾಜ ಪಾರ್ಟಿಯು ಮಾನ್ಯ ಮುಖ್ಯ ಮಂತ್ರಿಯವರಿಗೆ ಸಲ್ಲಿಸಿದ ಮನವಿ ದಿನಾಂಕ 5–3–2010.

**ಪ್ರಸ್ತಾವನೆ :**

ಬಹುಜನ ಸಮಾಜ ಪಾರ್ಟಿಯ ರಾಜ್ಯಾಧ್ಯಕ್ಷರು ಮಾನ್ಯ ಮುಖ್ಯ ಮಂತ್ರಿಯವರಿಗೆ ದಿನಾಂಕ 5–3–2010 ರಂದು ಸಲ್ಲಿಸಿದ ಮನವಿಯಲ್ಲಿ ಚಿತ್ರದುರ್ಗ ಜಿಲ್ಲೆಯ ಲಕ್ಷ್ಮಿ ಸಾಗರದ ದಲಿತ ಮಹಿಳೆ ಶ್ರೀಮತಿ ಭಾಗ್ಯಮ್ಮನನ್ನು ಬೆತ್ತಲೆಗೊಳಿಸಿ ಬೀದಿಗಳಲ್ಲಿ ಮೆರವಣಿಗೆ ನಡೆಸಿರುವ ಪ್ರಕರಣ ಹಾಗೂ ಬೂದಿ ಹಳ್ಳಿಯಲ್ಲಿ ಸುಮಾರು 2–3 ತಿಂಗಳಿಂದ ಸಾಮಾಜಿಕ ಬಹಿಷ್ಕಾರವು ಸೇರಿದಂತೆ ಅನೇಕ ಕೊಲೆಗಳು, ದೌರ್ಜನ್ಯಗಳು, ಮನೆ ಸುಟ್ಟಿರುವ ಬಗ್ಗೆ ಹಾಗೂ ಲೈಂಗಿಕ ಶೋಷಣೆ ಮುಂತಾದ ಘಟನೆಗಳನ್ನು ಗಮನಕ್ಕೆ ತಂದಿರುತ್ತಾರೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಸುಮಾರು 200 ಕ್ಕೂ ಹೆಚ್ಚು ಹಳ್ಳಿಗಳಲ್ಲಿ ನಡೆಯುತ್ತಿರುವ ಭೀಕರ ಸ್ವರೂಪದ ಹಲ್ಲೆ, ಅತ್ಯಾಚಾರ, ಅಸ್ಪೃಶ್ಯತಾ ಆಚರಣೆ, ಮಾನವ ಹಕ್ಕುಗಳ ಉಲ್ಲಂಘನೆ ಇತ್ಯಾದಿ ಸಂವಿಧಾನ ಬಾಹಿರ ಕೃತ್ಯಗಳು ನಡೆಯುತ್ತಿದ್ದು ಇವುಗಳನ್ನು ನಿವಾರಣೆ ಮಾಡಬೇಕೆಂದು ಸದರಿ ಮನವಿಯಲ್ಲಿ ಕೋರಿರುತ್ತಾರೆ.

ಈ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ್ದು ಈ ಪ್ರಕರಣದ ಬಗ್ಗೆ ಸಿ.ಐ.ಡಿ. ವಿಚಾರಣೆ ನಡೆಸಲು ಉದ್ದೇಶಿಸಿರುತ್ತದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಒಇ 50 ಸಿಐಡಿ 2010, ಬೆಂಗಳೂರು, ದಿನಾಂಕ : 19–04–2010**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿತ್ರದುರ್ಗ ಜಿಲ್ಲೆಯ ಲಕ್ಷ್ಮಿ ಸಾಗರದ ದಲಿತ ಮಹಿಳೆ ಶ್ರೀಮತಿ ಭಾಗ್ಯಮ್ಮನನ್ನು ಬೆತ್ತಲೆಗೊಳಿಸಿ ಬೀದಿಗಳಲ್ಲಿ ಮೆರವಣಿಗೆ ನಡೆಸಿರುವ ಪ್ರಕರಣ ಹಾಗೂ ಬೂದಿ ಹಳ್ಳಿಯಲ್ಲಿ ಸುಮಾರು 2–3 ತಿಂಗಳಿಂದ ಸಾಮಾಜಿಕ ಬಹಿಷ್ಕಾರವು ಸೇರಿದಂತೆ ಅನೇಕ ಕೊಲೆಗಳು, ದೌರ್ಜನ್ಯಗಳು, ಮನೆ ಸುಟ್ಟಿರುವ ಬಗ್ಗೆ ಹಾಗೂ ಲೈಂಗಿಕ ಶೋಷಣೆ, ಕೊಲೆ, ಅತ್ಯಾಚಾರ, ಅಸ್ಪೃಶ್ಯತಾ ಆಚರಣೆ, ಮಾನವ ಹಕ್ಕುಗಳ ಉಲ್ಲಂಘನೆ ನಡೆದಿರುವ ಘಟನೆಗಳ ಬಗ್ಗೆ ಸಿ.ಐ.ಡಿ. ವಿಚಾರಣೆ ನಡೆಸಲು ಆದೇಶಿಸಲಾಗಿದೆ.

ಸಿ.ಐ.ಡಿ. ವಿಚಾರಣಾ ತಂಡಕ್ಕೆ ಚಿತ್ರದುರ್ಗ ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು ಅಗತ್ಯ ಮಾಹಿತಿ ಹಾಗೂ ಸಹಕಾರವನ್ನು ನೀಡುವುದು.

ಮೇಲೆ ನಮೂದಿಸಿರುವ ಯಾವುದಾದರೂ ಪ್ರಕರಣಕ್ಕೆ ಸಂಬಂಧಿಸಿದಂತೆ ಚಿತ್ರದುರ್ಗ ಜಿಲ್ಲೆಯ ಯಾವುದೇ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ದಾಖಲಾಗಿದ್ದಲ್ಲಿ ಸದರಿ ಮೊಕದ್ದಮೆಯನ್ನು ಸಿ.ಐ.ಡಿ.ಗೆ ವರ್ಗಾಯಿಸಲು ಮಂಜೂರಾತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1080

**(ಪಿ. ಶಿವರಾಮ ಭಟ್),**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಅಪರಾಧಗಳು)

## HOME SECRETARIAT

**Sub :-** Sanction under Section 31 sub-Section 2 of Karnataka Police Act For issuing final order regarding controlling of Places of Public Entertainment.

**Read :-** 1) Police Commissioner, Bangalore City their order No. MAG (2) AM/5/2009-10, dated 08-01-2010.
2) Letter No. BC/CP (PS) 4/2009, dated 17-02-2010 from the Commissioner of Police, Bangalore City.

**Preamble:**

In notification bearing No. MAG(2)/AM/5/2009-10, dated 08-01-2010 a draft notification was issued by the Commissioner of Police, Bangalore City calling for objections from the affected persons to file their suggestions/objections within 30 days from the date of publication, as regards the regulation of public entertainment places being allowed to be open from midnight 0000 to 0600 hours or part thereof and to obtain written permission from the Commissioner of Police, Bangalore City under the power vested to him under Section 31, sub-Section W, of the Karnataka Police Act, 1963.

Now, in his letter read at (2) above the Commissioner of Police, Bangalore City has informed that no objections or suggestions have been filed by the members of the public and any of the interested public entertainment institutions in relation to the draft notification dated 08-01-2010. Thus, he has informed that the requirement of sub-Section 06 of Section 31 of the Karnataka Police Act, 1963 has been complied with.

Therefore, Commissioner of Police, Bangalore City has requested for issue of orders of Government, according the previous sanction of Government for publication of the final notification in the Gazette.

The matter has been examined. Hence, this Order

**Government Order No. HD 560 SST 2009, Bangalore, dated : 11-03-2010**

After examining of the proposal of the Commissioner of Police, Bangalore City, Bangalore, Government hereby accords sanction to the Commissioner of Police, Bangalore City, Bangalore for issue of final notification as required under Section 2 of Section 31 of the Karnataka Police Act, 1963

By Order and in the name of the Governor of Karnataka

P.R. 1092

(**K. C. Siddappa)**
Under Secretary to Govt.
Home Department
(Law & Order, COFEPOSA and Prosecution)

**ಆರ್ಥಿಕ ಸಚಿವಾಲಯ**

ತಿದ್ದುಪಡಿ

ಸಂಖ್ಯೆ : ಆಇ 145 ವೆಚ್ಚ–12/2010, ಬೆಂಗಳೂರು, ದಿನಾಂಕ 12–03–2010

ಕರ್ನಾಟಕ ಉಚ್ಚ ನ್ಯಾಯಾಲಯದ ಸನ್ಮಾನ್ಯ ಮುಖ್ಯ ನ್ಯಾಯಾಧೀಶರು ಹಾಗೂ ನ್ಯಾಯಾಧೀಶರುಗಳಿಗೆ ಅವರ ಕಛೇರಿ ಉಪಯೋಗಕ್ಕಾಗಿ 42 Laptop medel AVN-1520 Dell™ Vastro™ 1520 Note Book ಎಲ್ಲಾ ಸೇರಿ ಪ್ರತಿಯೊಂದಕ್ಕೆ ರೂ. 53,528/–ಗಳ ರೀತ್ಯಾ ನೇರವಾಗಿ M/s Dell India Ltd., ಸಂಸ್ಥೆಯಿಂದ ಖರೀದಿಸಲು ವಿನಾಯಿತಿಯನ್ನು ನೀಡಲಾದ ದಿನಾಂಕ 4–3–2010 ರ ಅಧಿಸೂಚನೆಯಲ್ಲಿನ 6ನೇ ಸಾಲಿನಲ್ಲಿನ **"ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ"** ಎಂಬುದರ ಬದಲಾಗಿ **"ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ"** ಎಂಬುದಾಗಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎನ್. ಚಂದ್ರಕುಮಾರ್)**

ಸರ್ಕಾರದ ಉಪ ಕಾರ್ಯದರ್ಶಿ,

ಪಿ.ಆರ್. 1093 ಆರ್ಥಿಕ ಇಲಾಖೆ (ಸಂಗ್ರಹಣಾಕೋಶ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ** : ಮಾನ್ಯ ಶಾಸಕರುಗಳ ಆಪ್ತ ಸಹಾಯಕರನ್ನು ನೇಮಿಸುವ ಬಗ್ಗೆ :–

**ಓದಲಾಗಿದೆ** : 1) ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 90 ಶಿಸನೇ 96, ದಿನಾಂಕ 28–11–96

2) ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 90 ಶಿಸನೇ 96,ದಿನಾಂಕ 16–12–96

3) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 180 ಶಿಸನೇ 99, ದಿನಾಂಕ 01–02–2000

4) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 92 ಶಿಸನೇ 2000, ದಿನಾಂಕ 16–08–2000

5) ಅಧಿಸೂಚನೆ ಸಂಖ್ಯೆ : ಸಿಆಸುಇ 48 ಎಸ್‌ಆರ್‌ಆರ್ 2009, ದಿನಾಂಕ 20–01–2010

**ಪ್ರಸ್ತಾವನೆ :**

ಮೇಲೆ ಓದಲಾದ (1) ಮತ್ತು (2)ರ ಅಧಿಕೃತ ಜ್ಞಾಪನಗಳಲ್ಲಿ ಮಾನ್ಯ ಶಾಸಕರ ಆಪ್ತ ಸಹಾಯಕರನ್ನು ಒದಗಿಸುವ ಬಗ್ಗೆ ಎಲ್ಲಾ  ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ. ಮೇಲೆ ಓದಲಾದ (3)ರ ಆದೇಶದಲ್ಲಿ ಮೇಲೆ ಓದಲಾಗಿರುವ (1) ಮತ್ತು (2)ರ ಅಧಿಕೃತ ಜ್ಞಾಪನಗಳನ್ನು ಭಾಗಶಃ ಮಾರ್ಪಡಿಸಿ ರಾಜ್ಯ ಸರ್ಕಾರದ ಯಾವುದೇ ಇಲಾಖೆಗಳಲ್ಲಿನ ಗ್ರೂಪ್ 'ಸಿ' ವೃಂದದ ನೌಕರರನ್ನು ಮಾನ್ಯ ಶಾಸಕರ ಆಪ್ತ ಸಹಾಯಕರಾಗಿ ನೇಮಿಸಲು ಅವಕಾಶ ಕಲ್ಪಿಸಲಾಗಿದೆ. ಮೇಲೆ ಓದಲಾದ (4)ರ ಆದೇಶದಲ್ಲಿ ನಿಗಮ : ಮಂಡಳಿ : ಸ್ಥಳೀಯ ಸಂಸ್ಥೆಗಳು : ಸ್ವಾಯತ್ತ : ಶಾಸನಬದ್ಧ ಸಂಸ್ಥೆಗಳ ಗ್ರೂಪ್ 'ಸಿ' ವೃಂದದ ನೌಕರರನ್ನು ಷರತ್ತಿಗೊಳಪಟ್ಟು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲು ಅವಕಾಶ ನೀಡಿದೆ. ಮೇಲೆ (5) ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15ರನ್ವಯ ಮಾನ್ಯ ವಿಧಾನ ಸಭಾ ಮತ್ತು ವಿಧಾನ ಪರಿಷತ್ ಸದಸ್ಯರುಗಳ ಆಪ್ತ ಸಹಾಯಕರನ್ನು ಗುತ್ತಿಗೆ ಆಧಾರದ ಮೇಲೆ ನೇಮಿಸಲು ಅವಕಾಶ ಕಲ್ಪಿಸಲಾಗಿದೆ.

ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 177 ಆಹಿಸೇ 2009,  ಬೆಂಗಳೂರು, ದಿನಾಂಕ 23–02–2010**

ಸೂಕ್ತ ಪರಿಶೀಲನೆಯ ನಂತರ ಗ್ರೂಪ್ 'ಸಿ' ವೃಂದದಲ್ಲಿ ಪ್ರಥಮ ದರ್ಜೆ ಸಹಾಯಕರ/ದ್ವಿತೀಯ ದರ್ಜೆ ಸಹಾಯಕರು/ಶೀಘ್ರಲಿಪಿಗಾರರಿಗೆ ನಿಗಧಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದಿರುವ ಅಭ್ಯರ್ಥಿಗಳನ್ನು ಮಾತ್ರ ಅವರ ವಿದ್ಯಾರ್ಹತೆಯನುಸಾರ ಕಂದಾಯ ಇಲಾಖೆಯಲ್ಲಿ ಮಂಜೂರಾಗಿರುವ ಪ್ರಥಮ ದರ್ಜೆ ಸಹಾಯಕರ/ದ್ವಿತೀಯ ದರ್ಜೆ ಸಹಾಯಕರ/ಶೀಘ್ರಲಿಪಿಗಾರರ ಹುದ್ದೆಗಳಿಗೆದುರಾಗಿ ಗುತ್ತಿಗೆ ಆಧಾರದ ಮೇಲೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ

ನೇಮಕಾತಿ) ನಿಯಮಗಳು 1977ರ ನಿಯಮ 15(1)(ಬಿ)(vii)ರನ್ವಯ ಮಾನ್ಯ ಶಾಸಕರ ಆಪ್ತ ಸಹಾಯಕರಾಗಿ ಸರ್ಕಾರದಿಂದ ಅನುಮೋದಿಸಲ್ಪಟ್ಟ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ನೇಮಿಸಲು ಅವಕಾಶ ನೀಡಿದೆ.

ಗುತ್ತಿಗೆ ನೇಮಕಾತಿಯು ಮೇಲೆ (5)ರಲ್ಲಿ ಓದಲಾದ ಅಧಿಸೂಚನೆ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕ 27–01–2010ರಿಂದ ಜಾರಿಗೆ ಬರುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 923 ಸೇವೆಗಳು–1/09, ದಿನಾಂಕ 07–08–2009ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್. ಎನ್. ಕೃಷ್ಣಮೂರ್ತಿ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1094 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸಿಬ್ಬಂದಿ)

## FOOD, CIVIL SUPPLIES CONSUMER AFFAIRS SECRETARIAT

### Notification-I

No. FCS : 34 : RPR : 2007, Bangalore, dated 01-03-2010

The Government of India had promulgated the Edible Oils Packaging (Regulation) Order 1988 on 17-8-1988, to regulate the sale of Edible Oils and prescribed that it is mandatory to pack all the Edible Oils to curb adulteration and to protect the consumers to get quality and quantity. However, under Clause 3 of the said order the State Governments have been delegated powers to exempt any oil from the provision of the Packaging Order in the interest of General Public for a certain period. As most of the Oil Industries in the State of Karnataka did not had the required infrastructure for packaging edible oils, the State Government be exercising its power under clause 3 had exempted, all Edible Oils from packaging up to 2005 by extending time limit from time to time.

Later, the State Government by exercising its power had issued Notification No. FCS: 110: RPR: 2002, dt. 10-11-2005 by enforcing the packaging (Regulation) Order 1988 to pack all the edible oils. However considering the request of the traders, it had again withdrawn the order vide Notification No. FCS : 110 : RPR : 2002, exempting 23 Edible Oils from packaging to give adequate time to the Producers of Small Scale edible oil industries & traders for a period of ONE-year (i.e., up to March 2007).

Aggrieved by the said order, M/s Bangalore Oil and Oil Seeds Association, Bangalore had filed a Writ Petition No. 1939/2008 & 16529-16613/2009 before the Hon'ble high Court of Karnataka requesting to issue necessary directions to Central/state Government for withdrawal of packaging order 1988 in the interest of General Public. The Hon'ble High Court of Karnataka had passed and order on 17-6-2009 by directing the Petitioner i.e., Oil Trade Association to make a representation before the Government and to submit their additional information with necessary documents to substantiate for exemption of the packaging order. Accordingly, the Association made a representation on 30-7-2009, seeking exemption of packing of edible oils.

The Government after hearing the case on 4-1-2010 and 11-1-2010, after taking all aspects in to account passed an order vide No. FCS : 48 : RPR : 2009, dt. 28-1-2010 by giving the edible oil industry and trade including the Small Scale Sector, a time limit of 30 days as transition period and to enforce the packaging ( Regulation) Order, 1988.

Now therefore, it is considered necessary that in the interest of giving adequate protection to the consumers by ensuring proper quality and quantity the Government of Karnataka in supersession of all earlier Notifications, hereby direct that the Edible Oil Packaging (Regulation) Order, 1988 shall be enforced in the entire State of Karnataka with effect from 1-3-2010 for the following Edible Oils :

| | |
|---|---|
| 1.Coconut Oil – ಕೊಬ್ಬರಿ ಎಣ್ಣೆ | 15. Maize (Corn) Oil – (ಮೆಕ್ಕೆ ಜೋಳದ (ಮುಸುಕಿನ ಜೋಳ) ಎಣ್ಣೆ |
| 2.Cotton Seed Oil – ಹತ್ತಿಬೀಜದ ಎಣ್ಣೆ | 16. Refined Vegetable Oil – (ಶುದ್ಧೀಕರಿಸಿದ ವೆಜಿಟೇಬಲ್ ಆಯಿಲ್) |
| 3.Ground Nut Oil – ಕಡಲೇಕಾಯಿ ಎಣ್ಣೆ | 17. Intercstcrified Vegetable Fat – (ಇಂಡರಿಸ್ಫೈಡ್ ವೆಜಿಟೆಬಲ್ ಫ್ಯಾಟ್) |
| 4.Linseed Oil – ಲಿನ್‌ಸೀಡ್ ಆಯಿಲ್ | 18.Almond Oil – (ಬಾದಾಮಿ ಎಣ್ಣೆ) |
| 5. Mahua Oil – ಮಹುವಾ ಎಣ್ಣೆ | 19.Water Melon Seed Oil – (ಕಲ್ಲಂಗಡಿ ಬೀಜದ ಎಣ್ಣೆ) |
| 6. Rapeseed Oil (Toria Oil/Mustard Oil – ರೇಪ್ ಸೀಡ್ ಎಣ್ಣೆ/ಸಾಸಿವೆ ಎಣ್ಣೆ | 20.Imported Rapeseed Oil – (ಆಮದು ಮಾಡಿದ ರೇಪ್ ಬೀಜದ ಎಣ್ಣೆ) |
| 7. Olive Oil – ಆಲೀವ್ ಎಣ್ಣೆ<br>(1) Virgin Olive Oil – ವರ್ಜಿನ್ ಆಲಿವ್ ಆಯಿಲ್<br>(2) Refind Olive Oil – ರೀಫೈಂಡ್ ಆಲಿವ್ ಆಯಿಲ್<br>(3) Refind Oilve Pomace Oil – ರೀಫೈಂಡ್ ಆಲಿವ್ ಪೊಮೇಸ್ | 21.P. Oil – (ತಾಳೆ ಎಣ್ಣೆ ) |
| 8. Poppy Seed Oil – ಗಸಗಸೆ ಎಣ್ಣೆ | 22.Palmolein Oil – (ಪಾಮೋಲಿನ್ ಎಣ್ಣೆ ) |
| 9. Sunflower Seed Oil Carthamus Tinctorius – (ಸೂರ್ಯಕಾಂತಿ ಬೀಜದಿಂದ ತೆಗೆದ ಎಣ್ಣೆ) | 23. Palm Kernel Oil – (ಫಾಮ್ ಕರ್ನಲ್ ಎಣ್ಣೆ) |
| 10. Imported Saffowerseed Oil & Safflowerseed Oil – (ಆಮದು ಸ್ಯಾಫ್ಲವರ್ ಸೀಡ್ಸ್ ಆಯಿಲ್) | 24.Sunflower Seed Oil – means the Oil obtained from clear and sound Sunflower seeds or cake from the Plants – Helianthus annus– (ಸೂರ್ಯಕಾಂತಿ ಬೀಜದ ಎಣ್ಣೆ) |
| 11. Taramira Oil – (ತರಮಿರ ಎಣ್ಣೆ) | 25.Imported sunflower seed oil and Sunflower seed oil (high oleic acid) – (ಆಮದು ಮಾಡಿದ ಸೂರ್ಯಕಾಂತಿ ಬೀಜದ ಎಣ್ಣೆ ಮತ್ತು ಸೂರ್ಯಕಾಂತಿ ಬೀಜದ ಎಣ್ಣೆ) (ಹೈ ಆಲಿಕ್ ಆಸಿಡ್) |
| 12. Til Oil (Gingelly or sesame oil) – (ಎಳ್ಳೆಣ್ಣೆ, ಜಿಂಜಿ ಅಥವಾ ಸೀಸೆಮ್) | 26. Rice Bran Oil – (ಭತ್ತದ ಹೊಟ್ಟಿನ ಎಣ್ಣೆ) |
| 13. Niger Seed Oil – (ನೈಗರ್ ಸೀಡ್ ಎಣ್ಣೆ) | 27. Blended Edible Vegetable Oil – (ಬ್ಲೆಂಡೆಡ್ ಎಡಿಬಲ್ ವೆಜಿಟೇಬಲ್ ಆಯಿಲ್) |
| 14. Soyabean Oil – (ಸೋಯಾಬೀನ್ ಎಣ್ಣೆ) | 28. Partially Hydrogenated & Winterized Soyabean Oil – (ಪಾರ್ಷಿಯಲ್ ಹೈಡ್ರೋಜಿನೇಟೆಡ್ ಅಂಡ್ ವಿಂಟರೈಸ್ಡ್ ಸೋಯಾಬೀನ್ ಆಯಿಲ್) |
| | 29.Partially Hydrogenated Soyabean Oil – (ಪಾರ್ಷಿಯಲಿ ಹೈಡ್ರೋಜಿನೇಟೆಡ್ ಸೋಯಾಬೀನ್ ಆಯಿಲ್) |

By Order and in the name of the Governor of Karnataka

(**Ramesh K. Jagirdar)**

Under Secretary to Govt.

Food, Civil Supplies Consumer Affairs Department

P.R. 1095

**ಸಹಕಾರ ಸಚಿವಾಲಯ**

**ವಿಷಯ** : ರಾಯಬಾಗ್ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ರಾಯಬಾಗ್ ಇವರ ಸನ್ 2000-01 ರಿಂದ 2007-08ನೇ ಸಾಲಿನ ಸರ್ವ ಸದಸ್ಯರ ವಾರ್ಷಿಕ ಮಹಾಸಭೆಯನ್ನು ಜರುಗಿಸಲು ಕಾಲಾವಧಿ ವಿಸ್ತರಣೆ ನೀಡುವ ಬಗ್ಗೆ.

**ಓದಲಾಗಿದೆ** : ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ ಅನಿ/189/ಕೈಸಸಂ-2, 2009-10, ದಿನಾಂಕ 11-01-2010.

***

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 11-01-2010ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು, ಕಬ್ಬು ಅಭಿವೃದ್ಧಿ ಆಯುಕ್ತರು ಹಾಗೂ ಸಕ್ಕರೆ ನಿರ್ದೇಶಕರು ದಿನಾಂಕ 26-10-2009 ರಂದು ಸರ್ಕಾರಕ್ಕೆ ಬರೆದ ಪತ್ರವನ್ನು ಉಲ್ಲೇಖಿಸುತ್ತಾ ರಾಯಬಾಗ್ ಸಹಕಾರಿ ಸಕ್ಕರೆ ಕಾರ್ಖಾನೆ (ನಿ)., ರಾಯಬಾಗ್ ಇವರ ಸನ್ 2000-01 ರಿಂದ 2007-08ನೇ ಸಾಲಿನ ಸರ್ವ ಸದಸ್ಯರ ವಾರ್ಷಿಕ ಮಹಾಸಭೆಯನ್ನು ದಿನಾಂಕ 31-12-2009 ರೊಳಗಾಗಿ ನಡೆಸಲು ಕೋರಿರುವ ಅವಧಿಯು ಮುಗಿದಿರುವುದರಿಂದ ಕಾರ್ಖಾನೆಯ ವಿಶೇಷಾಧಿಕಾರಿಗಳ ದಿನಾಂಕ 26-08-2009 ರಂದು ಜರುಗಿದ ಸಭೆಯಲ್ಲಿ ಸದರಿ ಸಾಲುಗಳ ಮಹಾಸಭೆಯನ್ನು ದಿನಾಂಕ 31-03-2010 ರೊಳಗಾಗಿ ನಡೆಸಲು ತೀರ್ಮಾನಿಸಿರುವಂತೆ ಅನುಮತಿ ನೀಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಸಇ 22 ಸಸಕಾ 2009, ಬೆಂಗಳೂರು, ದಿನಾಂಕ 08-03-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಯಬಾಗ್ ಸಹಕಾರ ಸಕ್ಕರೆ ಕಾರ್ಖಾನೆ ನಿ., ರಾಯಬಾಗ್ ಬೆಳಗಾವಿ ಜಿಲ್ಲೆ ಇದರ 2000-01 ರಿಂದ 2008-09ನೇ ಸಾಲುಗಳ ವಾರ್ಷಿಕ ಮಹಾ ಸಭೆಯನ್ನು ದಿನಾಂಕ 31-03-2010 ರೊಳಗೆ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 27(1)ರ ಉಪಬಂಧಗಳನ್ನು ಮಾರ್ಪಡಿಸಿ ಅನುಮತಿ ನೀಡಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 27(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಡು ದಿನಾಂಕ 31-03-2010ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ರ ಕಲಂನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ನಂಜುಂಡಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 1096

**ವಸತಿ ಸಚಿವಾಲಯ**

ತಿದ್ದುಪಡಿ

ಸಂಖ್ಯೆ : ವಇ 21 ಹೆಚ್‌ಎಎಸ್ 2010, ಬೆಂಗಳೂರು, ದಿನಾಂಕ 22-03-2010

ವಿಷಯ : ಬಳ್ಳಾರಿ ಜಿಲ್ಲೆ, ಹೊಸಪೇಟೆ ಕ್ಷೇತ್ರದ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

ಸರ್ಕಾರದ ತಿದ್ದುಪಡಿ ಸಂಖ್ಯೆ : ವಇ 07 ಹೆಚ್‌ಎಎಸ್ 2010, ದಿನಾಂಕ 03ನೇ ಫೆಬ್ರವರಿ 2010ರ ತಿದ್ದುಪಡಿಯಲ್ಲಿ **"**ಸರ್ಕಾರದ ಆದೇಶ ಸಂಖ್ಯೆ ವಇ 29 ಹೆಚ್‌ಎಎಸ್ 2008, ದಿನಾಂಕ 24ನೇ ನವೆಂಬರ್ 2010ರ**"** ಎಂಬುದಕ್ಕೆ ಬದಲಾಗಿ ಸರ್ಕಾರದ ಆದೇಶ ಸಂಖ್ಯೆ : ವಇ 29 ಹೆಚ್‌ಎಎಸ್ 2009, ದಿನಾಂಕ 24ನೇ ನವೆಂಬರ್ 2009ರ**"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

**(ಕೆ. ಆರ್. ವಲ್ಲೂರ)**
ಪೀಠಾಧಿಕಾರಿ-2, ವಸತಿ ಇಲಾಖೆ

ಪಿ.ಆರ್. 1097

## ENERGY SECRETARIAT

**Sub :-** Allotment of 1.00 MW Capacity of Grid Connected Solar Photovoltaic Power Plant to M/s Atria Power Corporation Limited-reg.

**Read :-** 1) Ministry of New & Renewable Energy, Government of India, New Delhi letter No. 32/61/2007-08/PVSE dated : 24-1-2008.

2) Letters No. KRED/07/GCPP-AP/2009/282, dated 28-1-2010 received from the Managing Director, Karnataka Renewable Energy Development Limited, Bangalore.

3) Proceedings of the Allotment Committee meeting held on 6-02-2010.

**Preamble:**

In the letter read at (1) above Ministry of New & Renewable Energy (MNRE) has issued guidelines for Demonstration Programme on Grid Interactive Solar Photovoltaic Power Generation, MNRE will provide subsidy of Rs. 12/-per Kwh of power generated through Solar Photovoltaic Power Plant and which is supplied to grid with minimum of 1.00 MW generation and maximum of 5.00 MW at a place. The developer has to approach Ministry of New & Renewable Energy through KREDL after acquisition of land for the project and entering into PPA with ESCOMs.

In the letter read at (2) above, the Managing Director, Karnataka Renewable Energy development Limited, Bangalore has recommended for allotment of 1.00 MW capacity of Grid Connected Solar Photovoltaic Power Plant to M/s Atria Power Corporation Limited at Nelavagalu Village, Ranebennur Taluk, Haveri District.

The proposal was placed before the allotment committee in meeting held on 6-02-2010 and the Committee recommended for allotment :-

Hence the Order :-

**Government Order No. EN 63 NCE 2010, Bangalore, dated : 28-04-2010**

Government accords approval for allotment of 1.00 MW capacity of Grid Connected Solar Photovoltaic Power Plant to M/s Atria Power Corporation Limited at Nelavagalu Village, Ranebennur Taluk, Haveri District subject to the following conditions :-

1(a) The allottee shall execute an agreement with Government within 45 days from the date of the capacity allotment order failing which the allotment order shall become automatically lapsed. There shall be no refund of the application fee of Rs. 10,000/-per M.W. received by Karnataka Renewable Energy Development Limited, Bangalore.

(b) Such an agreement on Rs. 400.00 Stamp Paper shall be routed through the Managing Director, Karnataka Renewable Energy Development Limited, Bangalore who shall certify as to its correctness after due scrutiny.

(c) Before executing the agreement the project developer shall deposit in advance with Karnataka Renewable Energy Development Limited, Bangalore the detailed project report (DPR) processing fee as per Government Order.

2(a) The project Developer shall obtain all statutory clearance from the respective authorities such as Karnataka Power Transmission Corporation Limited, Karnataka State Pollution Control Board, Forest, Ecology & Environment Department etc. Thereafter, he shall prepare and submit 3 copies of Detailed Project Report to the managing Director, Karnataka Renewable Energy Development Limited, Bangalore to enable to issue technical clearance for the project.

(b) The Deposit amount payable by the project allottee to Karnataka Renewable Energy Development Limited, Bangalore shall be adjusted towards a Detailed Project Report processing fee.

3. The allottee shall achieve financial closure within six months from the date of technical clearance for the Detailed Project Report by Karnataka Renewable Energy Development Limited, Bangalore.

4. The allottee shall take action to complete the project implementation within 12 months from the date of achieving financial closure.

5. Failure to reach any of the project milestones specified in S. No. 2,3, & 4 in the same order would constitute sufficient grounds to result in automatic cancelation of allotment . No. notice on this account will be given to the allottee.
6. The project Developer shall enter into a Wheeling and Banking Agreement with Karnataka Power Transmission Corporation Limited (KPTCL) IN CASE OF SELLING POWER TO the third party and in case of Power Purchase Agreement with KPTCL/concerned ESCOMs.
7. The allottee Company may seek full co-operation from the concerned Officers of the Government at the District and State level to ensure speedy completion of the project.
8. In the allotted site if any of the Government Project comes up, the Government Projects will have priority and the developer should not claim any compensation.
9. Government has reserved the power to cancel/modify this order
10. The Developer is wholly responsible for the objections raised by local people if any
11. The land is restricted to 5 Acres to this project

By Order and in the name of the Governor of Karnataka

(**S. J. Sampath Kumar)**

P.R. 1140

Under Secretary to Government

Energy Department

**ಇಂಧನ ಸಚಿವಾಲಯ**

**ತಿದ್ದುಪಡಿ**

ಸಂಖ್ಯೆ : ಇಎನ್ 569 ಎನ್‌ಸಿಇ 2009, ಬೆಂಗಳೂರು, ದಿನಾಂಕ 28–04–2010

ಸರ್ಕಾರಿ ಆದೇಶ ಸಂಖ್ಯೆ : ಇಎನ್ 569 ಎನ್‌ಸಿಇ 2009 ದಿನಾಂಕ 26–11–2009ರ ಆದೇಶ ಭಾಗದಲ್ಲಿರುವ scheduleನ ಬದಲಿಗೆ ಮಾರ್ಪಡಿಸಿದ ಈ ಕೆಳಗಿನ scheduleನ್ನು ಅಳವಡಿಸಲಾಗಿದೆ.

| Topo Sheet No. | Proposed capacity in MW | Near by villages of the proposed area and District | Geographical area description of the project |
|---|---|---|---|
| 48 M/11 & 48 M/12 | 39.75 MW | Kappatagudda, Gadag District | A NE-SW oriented continuous ridge is located on the North and South of Goulgeri Math and is of fairly dense scrub features. The earmarked area is covered in the following Geographical Co-ordinates :-<br>**Latitude :** 15⁰13'0-15⁰15'50"N<br>**Longitude :** 75⁰41'37'75⁰43'49"E<br>**Ridge Peaks :** 817, 781, 702 M Amsl.<br>**Note :**<br>The Part of the geographical area mentioned above also includes the area which already allotted to M/s Deepak, M. Patil 1.75 MW and to M/s Chitradurga Pvt. Ltd.- 12.5 MW. The areas excluding the areas allotted to these two companies is considered for M/s Karnataka Power Corporation Limited. |
| **Total** | **39.75 MW** | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್. ಜೆ. ಸಂಪತ್ ಕುಮಾರ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1141

ಇಂಧನ ಇಲಾಖೆ

**ಇಂಧನ ಸಚಿವಾಲಯ**

**ವಿಷಯ** : M/s Yenepoya Energy Private Limited ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ** : 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ : ಕೆಆರ್‌ಇಡಿ/06/ಬಂಜಾರ/09/3202 ದಿನಾಂಕ 19–9–2009/1–10–2009 ಹಾಗೂ ಸಂಖ್ಯೆ : ಕೆಆರ್‌ಇಡಿ/06/ಬಂಜಾರ/09/4176 ದಿನಾಂಕ : 19–12–2009.

**2.** ದಿನಾಂಕ : 6–02–2010 ರಂದು ನಡೆ ಹಂಚಿಕೆ ಸಮಿತಿ ಸಭೆಯ ನಡವಳಿಗಳು,

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Yenepoya Energy Private Limited ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ನೆರಿಯಾ ಗ್ರಾಮದ ಬಳಿ ಅಣಿಯೂರು ಹೊಳೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ 6–02–2010ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Yenepoya Energy Private Limited ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 521 ಎನ್‌ಸಿಇ 2009, ಬೆಂಗಳೂರು, ದಿನಾಂಕ: 28–04– 2010**

M/s Yenepoya Energy Private Limited ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ನೆರಿಯಾ ಗ್ರಾಮದ ಬಳಿ ಆಣಿಯೂರು ಹೊಳೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು (Weir **Latitude :** $13^0$05'40" **Longitude :** $75^0$28'55" Power House-**Latitude:** $13^0$04'02" **Longitude :** $75^0$28'50") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ :–

1(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್ ಅವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2,3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನು ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.
6. ಯೋಜನಾ ಆಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.
8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ದಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.
9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡೆಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್. ಜೆ. ಸಂಪತ್ ಕುಮಾರ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1142 ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ** : ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು

**ಓದಲಾಗಿದೆ** : 1. ಸರ್ಕಾರಿ ಅಧಿಸೂಚನೆ ಸಂಖ್ಯೆ : ಡಿಇ 14 ಪಿಎಸ್‌ಆರ್ 2002, ದಿನಾಂಕ 31–05–02
2. ಸರ್ಕಾರಿ ಆದೇಶ ಸಂಖ್ಯೆ : ಡಿಇ 15 ಪಿಎಸ್‌ಆರ್ 2002, ದಿನಾಂಕ 19–12–02
3. ಕವಿಪ್ರನಿನಿ ಮತ್ತು ಎಲ್ಲಾ ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳ ಪತ್ರ ಸಂಖ್ಯೆ ನಿ(ಪಿ ಮತ್ತು ಉಟ್ರಸ್ಟ್)/ಕ–21/ಸ–1/19–22, ದಿನಾಂಕ 06–04–2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣ (ಕರ್ನಾಟಕ ವಿದ್ಯುತ್ ಪ್ರಸರಣಾ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತು ಚಿಲ್ಲರೆ ಸರಬರಾಜು ಕಂಪನಿಗಳಿಗೆ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದ ಪ್ರಕಾರ, "ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay As You Go

